ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಸೋಮವಾರ, ದಿನಾಂಕ : 07 ನೇ ಡಿಸೆಂಬರ್, 2020

ಲೆಕ್ಕ ಅಧೀಕ್ಷಕರ ವೇತನ ಶ್ರೇಣಿಯಲ್ಲಿ ತಾರತಮ್ಯದ ಬಗ್ಗೆ

ಡಾ|| ಚಂದ್ರಶೇಖರ ಬಿ ಪಾಟೀಲ್(ಪದವೀಧರ ಕ್ಷೇತ್ರ) –

20 (82) ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) 2019-20ರಿಂದ ಇಲ್ಲಿಯವರೆಗೆ ಕಲಬುರಗಿ ವಿಭಾಗದ ಶಿಕ್ಷಣ ಆಯುಕ್ತಾಲಯದಲ್ಲಿ ಲೆಕ್ಕ ಅಧೀಕ್ಷಕರ ಹುದ್ದೆಗೆ ಬಡ್ತಿಯನ್ನು ನೀಡಲಾಗಿದೆಯೇ; ನೀಡಲಾಗಿದ್ದಲ್ಲಿ, ಎಷ್ಟು ಜನರಿಗೆ ನೀಡಲಾಗಿದೆ. ಸದರಿ ಲೆಕ್ಕ ಅಧೀಕ್ಷಕರಿಗೆ ಯಾವ ವೇತನ ಶ್ರೇಣಿಯನ್ನು ನೀಡಲಾಗಿದೆ;

(ಆ) ಬೆಂಗಳೂರು ಹಾಗೂ ಇತರೆ ಶಿಕ್ಷಣ ಆಯುಕ್ತಾಲಯದಲ್ಲಿ ಲೆಕ್ಕ ಅಧೀಕ್ಷಕರ ಹುದ್ದೆಗೆ ಬಡ್ತಿಯನ್ನು ನೀಡಿದಾಗ ಯಾವ ವೇತನ ಶ್ರೇಣಿಯನ್ನು ನೀಡಲಾಗುವುದು;

(ಇ) ಬೆಂಗಳೂರು ಹಾಗೂ ಕಲಬುರಗಿ ಶಿಕ್ಷಣ ಆಯುಕ್ತಾಲಯದವರು ನೀಡುತ್ತಿರುವ ಲೆಕ್ಕ ಅಧೀಕ್ಷಕರ ವೇತನ ಶ್ರೇಣಿಯು ಒಂದೆ ಆಗಿದೆಯೇ; ಇಲ್ಲದಿದ್ದಲ್ಲಿ ತಾರತಮ್ಯಕ್ಕೆ ಕಾರಣಗಳೇನು;

(ಈ) ಕಲಬುರಗಿ ಶಿಕ್ಷಣ ಆಯುಕ್ತಾಲಯದ ಲೆಕ್ಕ ಅಧೀಕ್ಷಕರಿಗೆ ಆಗಿರುವ ವೇತನ ತಾರತಮ್ಯವನ್ನು ಯಾವ ಕಾಲಮಿತಿಯೊಳಗೆ ಸರಿಪಡಿಸಲಾಗುವುದು; ಮಾಹಿತಿ ಒದಗಿಸುವುದು?